| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನದ ಜಮೀನಿನ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ವಿಸ್ತೀರ್ಣ | ಆಕಾರ |
| 13 | ಸಿ.ಸಿ. ಶಂಕರಲಿಂಗಯ್ಯ ಬಿನ್ ಚನ್ನಮಲ್ಲೇಗೌಡ | ಸಿ.ಸಿ. ಶಂಕರಲಿಂಗಯ್ಯ | 60/10ಎ | ತರಿ | 61/3ಎ | 60/9 | 61/3ಎ | ಈಗಾಗಲೇ ಭೂ ಸ್ವಾಧೀನ ಕ್ಕೊಳಪಟ್ಟ ಪ್ರದೇಶ | 0–0 1/2 | 0–03 |
| **ಎಲ್ಲಾ ಗ್ರಾಮಗಳ ಒಟ್ಟು** | | | | | | | | | **2–35 3/4** | |

**ಘೋಷ್ವಾರೆ**

| ಕ್ರ.ಸಂ | ಗ್ರಾಮದ ಹೆಸರು | ಖುಷ್ಕಿ | ತರಿ | ಒಟ್ಟು |
|---|---|---|---|---|
| 1 | ಯಡಿಯೂರು | 1–35 | – | 1–35 |
| 2 | ಬೀರಗಾನಹಳ್ಳಿ | 0–17 1/2 | – | 0–17 1/2 |
| 3 | ಚಾಕೇನಹಳ್ಳಿ | – | 0–23 1/4 | 0–23 1/4 |
| **ಒಟ್ಟು** | | **2–12 1/2** | **0–23 1/4** | **2–35 3/4** |

ಪಿ.ಆರ್. 100

ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಅಧಿನಿಯಮ 6(1)ನೇ ಪ್ರಕರಣದ ಮೇರೆಗೆ ಘೋಷಣೆ**

**ಕ್ರಮಾಂಕ:ಕಂ.ಇ. 24 ಭೂಸ್ವಾಗ್ರಾ 2009, ದಿನಾಂಕ: 10ನೇ ಮಾರ್ಚ್ 2010**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಭೂಮಿಗಳು ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಹಾರೋಬೆಲೆ ಏತನೀರಾವರಿ ಎಡದಂಡ ನಾಲೆ ನಿರ್ಮಾಣಕ್ಕಾಗಿ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ರವರು ಭೂಸ್ವಾಧೀನ ಕಾಯ್ದೆ 1894ರ ಕಲಂ4(1)ರ ಮೇರೆಗೆ ಅಧಿಸೂಚನೆಗೆ ಕ್ರಮಾಂಕ:ರಾಜಿಕ:ಎಲ್ಎಕ್ಯೂಸಿಆರ್:2/07–08, ದಿ:31–12–2008ರ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ.

ಮತ್ತು ಕರ್ನಾಟಕ ಕಾಯ್ದೆ: 33–1991ರನ್ವಯ ತಿದ್ದುಪಡಿಯಾದ ಭೂ ಅರ್ಜನೆ ಅಧಿನಿಯಮ 1894(ಕೇಂದ್ರ ಅಧಿನಿಯಮ ಸಂಖ್ಯೆ 1894ರ) 5–ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1–ಎ) ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯವರು ನೀಡಿರುವ ವರದಿಯನ್ನು ಪರಿಶೀಲಿಸಿದ ನಂತರ ಮೇಲೆ ನಿರ್ದಿಷ್ಟಪಡಿಸಿದ ಉದ್ದೇಶಕ್ಕಾಗಿ ಸದರಿ ಭೂಮಿಗಳನ್ನು ಅರ್ಜನೆ ಮಾಡಿಕೊಳ್ಳುವ ಅಗತ್ಯವಿದೆ ಎಂದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿರುವುದರಿಂದ:

ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಭೂಮಿಗಳು ಅಗತ್ಯವಾಗಿವೆ ಎಂದು ಸದರಿ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಈ ಮೂಲಕ ಘೋಷಿಸಲಾಗಿದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ ರಾಮನಗರ ಇವರನ್ನು ಸದರಿ ಭೂಮಿಗಳಿಗೆ ಸಂಬಂಧಿಸಿದಂತೆ ಇನ್ನುಮುಂದೆ ಕೈಗೊಳ್ಳುವ ಎಲ್ಲಾ ವ್ಯವಹಾರಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ನೇಮಕ ಮಾಡಲಾಗಿದೆ. ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳುವ ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ಉಪ ವಿಭಾಗ, ರಾಮನಗರ ಇವರ ಕಛೇರಿಯಲ್ಲಿ ಇಡಲಾಗಿದೆ. (ಎಲ್ಎಕ್ಯೂಎಸ್ಆರ್:11/07–08)

**ಅನುಸೂಚಿ**

**ಜಿಲ್ಲೆ: ರಾಮನಗರ ತಾಲ್ಲೂಕು: ಕನಕಪುರ ಹೋಬಳಿ: ಉಯ್ಯಂಬಳ್ಳಿ ಗ್ರಾಮ: ಕೊಕ್ಕರೆಹೊಸಹಳ್ಳಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ. | ಕಂದಾಯ ರೂ. ಪೈ. |
| 1 | ಮೋಟೇಗೌಡ, ಪುಟ್ಟೇಗೌಡ | ಮೋಟೇಗೌಡ, ಪುಟ್ಟೇಗೌಡ | 91/1 | ಖುಷ್ಕಿ | 91/1 | 116 | 92 | 91/2 | 0–14 | 0–37 |
| 2 | ಪಾರ್ವತಮ್ಮ, ಕೆ.ಎಂ.ನಾಗರಾಜು | ಪಾರ್ವತಮ್ಮ, ಕೆ.ಎಂ.ನಾಗರಾಜು | 91/2 | ಖುಷ್ಕಿ | ಉಳಿಕೆ | 116 | 91/1 | 91/3 | 0–07 | 0–18 |
| 3 | ಸಿದ್ದಲಿಂಗೇಗೌಡ, ದೊಡ್ಡಕೆಂಪೇಗೌಡ | ಸಿದ್ದಲಿಂಗೇಗೌಡ, ದೊಡ್ಡಕೆಂಪೇಗೌಡ | 92/5 | ಖುಷ್ಕಿ | ಉಳಿಕೆ | 116 | 92/4 | 92/6 | 0–02 | 0–13 |
| 4 | ಸಿದ್ದಲಿಂಗೇಗೌಡ ಬಿನ್ ದೊಡ್ಡ ಹೈದೇಗೌಡ | ಸಿದ್ದಲಿಂಗೇಗೌಡ ದೊಡ್ಡ ಹೈದೇಗೌಡ | 92/6 | ಖುಷ್ಕಿ | ಉಳಿಕೆ | 116 | 92/5 | 92/7 | 0–03 | 0–10 |
| 5 | ಸಿದ್ದಲಿಂಗೇಗೌಡ ಬಿನ್ ದೊಡ್ಡಹೈದೇಗೌಡ | ಸಿದ್ದಲಿಂಗೇಗೌಡ ಬಿನ್ ದೊಡ್ಡಹೈದೇಗೌಡ | 92/7 | ಖುಷ್ಕಿ | ಉಳಿಕೆ | 116 | 92/6 | 90, 91 | 0–04 | 0–10 |
| 6 | ನಾಗಮ್ಮ ಕೋಂ ಜವರೇಗೌಡ | ನಾಗಮ್ಮ ಕೋಂ ಜವರೇಗೌಡ | 181 | ಖುಷ್ಕಿ | ಉಳಿಕೆ | ಉಳಿಕೆ | ಉಳಿಕೆ | 116 | 0–14 | 0–43 |
| 7 | ನಿಂಗಮ್ಮ ಕೋಂ ಜವರೇಗೌಡ | ನಿಂಗಮ್ಮ ಕೋಂ ಜವರೇಗೌಡ | 182 | ಖುಷ್ಕಿ | ಉಳಿಕೆ | ಉಳಿಕೆ | 116 | 184<br>185 | 0–25 | 0–77 |
| 8 | ಕೆಂಪೇಗೌಡ ಬಿನ್ ಈರೇಗೌಡ | ಕೆಂಪೇಗೌಡ ಬಿನ್ ಈರೇಗೌಡ | 183 | ಖುಷ್ಕಿ | 184 | 116 | 182<br>116 | 116 | 0–12 | 0–92 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ. | ಕಂದಾಯ ರೂ. ಪೈ. |
| 9 | ಸಿದ್ದಲಿಂಗೇಗೌಡ ಬಿನ್ ದೊಡ್ಡ ಹೈದೇಗೌಡ | ಸಿದ್ದಲಿಂಗೇಗೌಡ ಬಿನ್ ದೊಡ್ಡ ಹೈದೇಗೌಡ | 184 | ಖುಷ್ಕಿ | 185ರ ಉಳಿಕೆ | 182 183 | 182 | ಉಳಿಕೆ | 0–30 | 1–05 |
| 10 | ದೊಡ್ಡಕೆಂಪೇಗೌಡ ಬಿನ್ ದೊಡ್ಡಹೈದೇಗೌಡ | ದೊಡ್ಡಕೆಂಪೇಗೌಡ ಬಿನ್ ದೊಡ್ಡಹೈದೇಗೌಡ | 185 | ಖುಷ್ಕಿ | ಉಳಿಕೆ | 184 | 182 | ಉಳಿಕೆ | 0–05 | 0–15 |
| 11 | ದೇವಮ್ಮ ಕೋಂ ಲಿಂಗೇಗೌಡ | ದೇವಮ್ಮ ಕೋಂ ಲಿಂಗೇಗೌಡ | 187 | ಖುಷ್ಕಿ | ಉಳಿಕೆ | ಉಳಿಕೆ | 116 | 116 | 0–24 | 0–73 |
| | | | | | | | | **ಒಟ್ಟು** | **3–20** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 101

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

## ಕಂದಾಯ ಸಚಿವಾಲಯ

### ಭೂ ಸ್ವಾಧೀನ ಕಾಯಿದೆ ಕಲಂ 6(1)ನೇ ಪ್ರಕರಣ ಮೇರೆಗಿನ ಅಧಿಸೂಚನೆ

**ಕ್ರಮಾಂಕ:ಕಂ.ಇ. 46 ಭೂ ಸ್ವಾ ಶಿ 2009, ದಿನಾಂಕ: 18ನೇ ಜನವರಿ 2010**

ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆರವರು ದಿನಾಂಕ: 20.11.2008ರ ಕರ್ನಾಟಕ ರಾಜ್ಯಪತ್ರದ ಭಾಗ–6 ಪುಟ ಸಂಖ್ಯೆ: 1271 ರಿಂದ 1272ರಲ್ಲಿ ಪ್ರಕಟವಾದ ಅಧಿಸೂಚನೆ ಕ್ರಮಾಂಕ:ಆರ್(3)ಎಲ್ಎಕ್ಯೂ.ಎಸ್ಆರ್.15 & 132/2007–08 ದಿನಾಂಕ: 25.09.2008ರ ಅಧಿಸೂಚನೆಯಲ್ಲಿ ಸೂಚಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ, ಸಂಕಣ್ಣ ಶ್ಯಾನುಭೋಗ್ ಗ್ರಾಮದ ರಸ್ತೆಯ ಸಲುವಾಗಿ ಬೇಕಾಗಬಹುದೆಂದು ಅಧಿಸೂಚಿಸಿರುತ್ತಾರೆ.

ಕರ್ನಾಟಕ ಸರ್ಕಾರದವರು 1961ನೇ ಸಾಲಿನ ಕರ್ನಾಟಕ ಅಧಿನಿಯಮ 17ರ ತಿದ್ದುಪಡಿಯಾದ 1904ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ 1894ನೇ ಸಾಲಿನ ಕೇಂದ್ರ ಅಧಿನಿಯಮದ ಪ್ರಕರಣ 5(ಎ)ರ ಉಪ ಪ್ರಕರಣ (2) ಮತ್ತು 6(1–ಎ) ಪ್ರಕರಣದ ಮೇರೆಗೆ ಉಪವಿಭಾಗಾಧಿಕಾರಿಗಳು, ಸಾಗರ ರವರು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿದ ನಂತರ ಸದರಿ ಜಮೀನುಗಳನ್ನು ಮೇಲೆ ನಿರ್ದಿಷ್ಟಪಡಿಸಲಾದ ಉದ್ದೇಶಕ್ಕೆ ವಶಪಡಿಸಿಕೊಳ್ಳಲಾಗಿದೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಸದರಿ ಭೂ ಸಂಗ್ರಹಣ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನು ಮೇಲಿನ ಉದ್ದೇಶಕ್ಕಾಗಿ ಬೇಕಾಗಿರುವುದರಿಂದ ಈ ಮೂಲಕ ಘೋಷಿಸಲಾಗಿದೆ.

ಸದರಿ ಭೂ ಸಂಗ್ರಹಣ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಉಪವಿಭಾಗಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ರವರನ್ನು ಸದರಿ ಜಮೀನಲ್ಲಿ ಮುಂದಿನ ಎಲ್ಲಾ ಕಾನೂನು ಕ್ರಮಗಳನ್ನು ಜಿಲ್ಲಾಧಿಕಾರಿಗಳವರ ಪ್ರಶಾಸನ ಕಾರ್ಯಕ್ರಮಗಳನ್ನು ನಿರ್ವಹಿಸುವಂತೆ ಈ ಮೂಲಕ ನಿಯೋಜಿಸಲಾಗಿದೆ. ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ಆದೇಶಗಳನ್ನು ಪಡೆಯುವಂತೆ ಸದರಿ ಅಧಿನಿಯಮ 7ನೇ ಪ್ರಕರಣದ ಮೇರೆಗೆ ನಿರ್ದೇಶಿಸಲಾಗಿದೆ.

ಸದರಿ ಜಮೀನುಗಳ ನಕ್ಷೆಯನ್ನು ಉಪವಿಭಾಗಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ರವರ ಕಾರ್ಯಾಲಯದಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ಶಿವಮೊಗ್ಗ ತಾಲ್ಲೂಕ್: ಸಾಗರ ಹೋಬಳಿ: ಕರೂರು ಗ್ರಾಮ: ಸಂಕಣ್ಣ ಶ್ಯಾನುಭೋಗ್**

| ಕ್ರ. ಸಂ. | ಖಾತೆದಾರರ / ಹಿಡುವಳಿದಾರರ ಹೆಸರು ಶ್ರೀಯುತರುಗಳಾದ : | ಅನುಭವದಾರರ ಹೆಸರು ಶ್ರೀಯುತರುಗಳಾದ : | ಸ.ನಂ. | ತರಹೆ | ಚಕ್ಕುಬಂದಿ | | | | ಭೂ ಸ್ವಾಧೀನದ ಜಮೀನಿನ ವಿವರ | |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
| | | | | | **1. ಗಿಳಲಗುಂಡಿ** | | | | | |
| 1 | ರಾಮಾನಾಯ್ಕ್ ಬಿನ್ ಭೈರಾ | ರಾಮಾನಾಯ್ಕ್ ಬಿನ್ ಭೈರಾ | 86/3 | ತರಿ | 86 | 86 | 86 | ರಸ್ತೆ | 0.03 | 0.60 |
| 2 | ರಾಜಪ್ಪ ಹೆಚ್.ಎಂ. ಬಿನ್ ಮಂಜನಾಯ್ಕ್ | ರಾಜಪ್ಪ ಹೆಚ್.ಎಂ. ಬಿನ್ ಮಂಜನಾಯ್ಕ್ | 86/3 | ತರಿ | 86 | 86 | 12 | ರಾಮಾನಾಯ್ಕ್ ಬಿನ್ ಕರಿಯಾನಾಯ್ಕ್ | $0.1^1/_2$ | 0.30 |
| | | **ಜುಮ್ಲಾ** | | | | | | | **$0.4^1/_2$** | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 106

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ)

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

**ಕಲಂ 4(1) ರ ತಿದ್ದುಪಡಿ ಅಧಿಸೂಚನೆ**

**ಎಲ್ಎಕ್ಯೂ.ಎಸ್ಆರ್: 57/09–10, ದಿನಾಂಕ: 6ನೇ ಮಾರ್ಚ್ 2010**

ಕರ್ನಾಟಕ ಭೂಸ್ವಾಧೀನ ಕಾಯಿದೆ 33:91 ರ ಅನ್ವಯ ತಿದ್ದುಪಡಿಯಾದ ಕೇಂದ್ರ ಭೂಸ್ವಾಧೀನ ಅಧಿನಿಯಮ 1894ರ ಕಲಂ 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರ ಆದೇಶ ಸಂ. ಎಲ್ಎಕ್ಯೂ. ಎಸ್ಆರ್: 35/2008–09 ದಿನಾಂಕ: 20–11–2008 ರಂತೆ ಹೊರಡಿಸಿದ್ದ ಅಧಿಸೂಚನೆಯು ದಿನಾಂಕ: 4–12–2008 ರ ಕರ್ನಾಟಕ ರಾಜ್ಯಪತ್ರದ ಭಾಗ–6 ರ ಪುಟ ಸಂ. 1326–1328 ರಲ್ಲಿ ಪ್ರಕಟಗೊಂಡಿದ್ದು, ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವಂತೆ ತಿದ್ದುಪಡಿ ಮಾಡಲಾಗಿದೆ.

**ಅನುಸೂಚಿ**

**ಜಿಲ್ಲೆ: ತುಮಕೂರು** **ಹೋಬಳಿ: ಕಸಬಾ** **ತಾಲ್ಲೂಕು: ತುಮಕೂರು** **ಗ್ರಾಮ: ತುಮಕೂರು**

| ಕಲಂ 4(1) ರ ಕ್ರ.ಸಂ. | ಕಲಂ 4(1) ರ ಅಧಿಸೂಚನೆ ಯಂತೆ ಪ್ರಕಟಗೊಂಡಿರುವುದು | | | ಜೆ.ಎಂ.ಸಿ.ಯಂತೆ ಕಲಂ 4(1)ಕ್ಕೆ ತಿದ್ದುಪಡಿಯಾಗಬೇಕಿರುವುದು | | |
|---|---|---|---|---|---|---|
| | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ |
| 6 | 809/646 | ಮನೆ ಮತ್ತು ನಿವೇಶನ | 952 | 809/646 | ಅಂಗಡಿ ಕಟ್ಟಡ | 1225 |
| 7 | 266/431/650 | ಮನೆ ಮತ್ತು ನಿವೇಶನ | 357 | 266/431/650 | ಅಂಗಡಿ ಕಟ್ಟಡ (ಆರ್‌ಸಿಸಿ) | 736 |
| 8 | 2152/241–242/651 | ಮನೆ ಮತ್ತು ನಿವೇಶನ | 306 | 2152/241–242/651 | ಅಂಗಡಿ ಕಟ್ಟಡ (ಆರ್‌ಸಿಸಿ) | 540 |
| 10 | 1505/814 | ಮನೆ ಮತ್ತು ನಿವೇಶನ | 850 | 1505/814 | (ಬ್ಯಾಂಕ್ ಕಟ್ಟಡ) ಆರ್‌ಸಿಸಿ | 1265 |
| 11 | 263/417/429/817 | ಮನೆ | 374 | 263/417/429/817 | ಅಂಗಡಿ ಕಟ್ಟಡ (ಆರ್‌ಸಿಸಿ) | 790 |
| 12 | 2634/417–7 | ಮನೆ ಮತ್ತು ನಿವೇಶನ | 306 | 2634/417–7 | ಅಂಗಡಿ ಕಟ್ಟಡ (ಆರ್‌ಸಿಸಿ) | 490 |
| 13 | 265/1193 | ಮನೆ | 238 | 265/1193 | ಅಂಗಡಿ ಕಟ್ಟಡ (ಆರ್‌ಸಿಸಿ) | 352.5 |
| 14 | 264/426/819 | ಮನೆ | 510 | 264/426/819 | (ಹೆಂಚಿನ ಮನೆ) ಕಟ್ಟಡ | 644 |
| 15 | 754/1/1596 | ಕಟ್ಟಡಗಳು | 1360 | 754/1/1596 | ಅಂಗಡಿ ಕಟ್ಟಡ (ಆರ್‌ಸಿಸಿ) | 2330 |
| 17 | – | ಖಾಲಿ ನಿವೇಶನ | 8942 | – | ಖಾಲಿ ಜಾಗ (ಗ್ರಾಮಠಾಣ) | 9180 |

| ಕಲಂ 4(1) ರ ಕ್ರ.ಸಂ. | ಕಲಂ 4(1) ರ ಅಧಿಸೂಚನೆ ಯಂತೆ ಪ್ರಕಟಗೊಂಡಿರುವುದು | | | | ಜೆ.ಎಂ.ಸಿ.ಯಂತೆ ಕಲಂ 4(1) ಕ್ಕೆ ತಿದ್ದುಪಡಿ ಯಾಗಬೇಕಿರುವುದು | | | |
|---|---|---|---|---|---|---|---|---|
| | ಅನುಭವದಾರ ಹೆಸರು | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ | ಅನುಭವದಾರ ಹೆಸರು | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ |
| 9 | –– | – | ದೇವಸ್ಥಾನ | | (ಶನಿದೇವರ ದೇವಸ್ಥಾನ) | – | ದೇವಸ್ಥಾನ (ಗ್ರಾಮಠಾಣ) | 942 |
| 16 | –– | – | ಖಾಲಿ ನಿವೇಶನ | 7735 | ಸಂತೆ ಮೈದಾನ ಮತ್ತು ದೇವಸ್ಥಾನ (ಗುಂಡಾಲಮ್ಮ) | – | ಖಾಲಿ ಜಾಗ ದೇವಸ್ಥಾನ (ಗ್ರಾಮಠಾಣ) | 11480 |

ಜಿಲ್ಲಾಧಿಕಾರಿಗಳು,
ತುಮಕೂರು ಜಿಲ್ಲೆ, ತುಮಕೂರು

ಪಿ.ಆರ್. 85

## ತಹಶೀಲ್ದಾರ್ ರವರ ಕಛೇರಿ, ಶಿಕಾರಿಪುರ ತಾಲ್ಲೂಕು, ಶಿಕಾರಿಪುರ

**ನಮೂನೆ–27**

**ನಂ. ಎಲ್.ಎನ್.ಡಿ. ಸಿ.ಆರ್. 83/08–09, ಶಿಕಾರಿಪುರ, ದಿನಾಂಕ: 31ನೇ ಮಾರ್ಚ್ 2010**

**38ನೇ ನಿಯಮ 68(1) ರ ಪ್ರಕರಣದ ಮೇರೆಗೆ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸರ್ಕಾರಿ ಹೊಂಡದ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲ ಎಂದು ರಾಜಸ್ವ ಸರ್ಕಾರಕ್ಕೆ ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸರ್ಕಾರಿ ಹೊಂಡ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಹೊಂಡ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿರುತ್ತದೆ.

ಸದರಿ ಹೊಂಡದ ಭಾಗದಲ್ಲಿ ಅಥವಾ ಅವರ ಮೇಲೆ ಹಿತಾಸಕ್ತಿಯುಳ್ಳವರು ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವ ಇರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕರು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಬಂಧಿಸಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಮತ್ತು ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮಿಷನರ್‌ಗೆ ಬರಹದಲ್ಲಿ ತಿಳಿಸತಕ್ಕದ್ದು. ಮತ್ತು ಸದರಿ ಆಕ್ಷೇಪಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿದಂತೆ ಡೆಪ್ಯೂಟಿ ಕಮಿಷನರ್ ಪರಿಶೀಲಿಸತಕ್ಕದ್ದು.

**ಅಧಿಸೂಚಿ**

| | |
|---|---|
| ಸರ್ಕಾರಿ ಹೊಂಡದ ಭಾಗ ಬರುವ ಗ್ರಾಮಗಳು | ಹಳಿಯೂರು |
| ತಾಲ್ಲೂಕು | ಶಿಕಾರಿಪುರ |
| ಜಿಲ್ಲೆ | ಶಿವಮೊಗ್ಗ |
| ಹೊಂಡದ ಭಾಗ ಅಥವಾ ಭಾಗಗಳು | ಸರ್ಕಾರಿ ಹಾರನಹೊಂಡ |
| ಭಂಜನ್ ರಸ್ತೆ ಭಾಗಗಳ ಸರಿಸುಮಾರು ವಿಸ್ತೀರ್ಣ | 1) ಹಳಿಯೂರು ಸ.ನಂ........ಕ್ಕೆ ಚಕ್ಕುಬಂದಿ<br>1) ಪೂರ್ವಕ್ಕೆ ರಸ್ತೆ 210 ರಲ್ಲಿ 7–07 ಎಕರೆ<br>2) ಪಶ್ಚಿಮಕ್ಕೆ ಸ.ನಂ. : ಕಂಬಳಿ ಹೊಂಡ 240<br>3) ಉತ್ತರಕ್ಕೆ ಸ.ನಂ. 244, ಹಳಿಯೂರು ಸ.ನಂ. 6–03 ಗುಂಟೆ<br>4) ದಕ್ಷಿಣಕ್ಕೆ ಇದೇ ಸ.ನಂ.ಉಳಿದ ಭಾಗ, ಹಾರನಹೊಂಡ |

2) ಹಳಿಯೂರು ಸ.ನಂ. 215ಕ್ಕೆ ಚಕ್ಕುಬಂದಿ:–

1) ಪೂರ್ವಕ್ಕೆ ಇದೇ ಸ.ನಂ.
2) ಪಶ್ಚಿಮಕ್ಕೆ ಸ.ನಂ. 236
3) ಉತ್ತರಕ್ಕೆ: ಸ.ನಂ. 214
4) ದಕ್ಷಿಣಕ್ಕೆ: ಇದೇ ಸ.ನಂ. ಉಳಿದ ಜಾಗ.

3) ಹಳಿಯೂರು ಸ.ನಂ. 233:ಪಿ ರಲ್ಲಿ 0–12 ಗುಂಟೆ ಖರಾಬು ಚಕ್ಕುಬಂದಿಯ ವಿವರ:

1) ಪೂರ್ವಕ್ಕೆ: ಇದೇ ಸ.ನಂ. ಉಳಿದ ಜಾಗ
2) ಪಶ್ಚಿಮಕ್ಕೆ; ಇದೇ ಸ.ನಂ. ಉಳಿದ ಜಾಗ
3) ಉತ್ತರಕ್ಕೆ: ಇದೇ ಸ.ನಂ. ಉಳಿದ ಜಾಗ
4) ದಕ್ಷಿಣಕ್ಕೆ: ಇದೇ ಸ.ನಂ. ಉಳಿದ ಜಾಗ

ಪಿ.ಆರ್. 110

ತಹಶೀಲ್ದಾರ್, ಶಿಕಾರಿಪುರ ತಾಲ್ಲೂಕು

**ಕಂದಾಯ ಸಚಿವಾಲಯ**

**ಭೂಸ್ವಾಧೀನ ಕಾಯ್ದೆ ಕಲಂ 48(1)ರ ರೀತ್ಯಾ ಘೋಷಣೆ**

**ಅಧಿಸೂಚನೆ ಕ್ರಮಾಂಕ:ಕಂಇ:07:ಭೂಸ್ವಾತು:2010, ದಿನಾಂಕ: 6ನೇ ಮಾರ್ಚ್ 2010**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಗೂಳೂರು ಗ್ರಾಮದ ಸರ್ವೆ ನಂಬರ್ 131 ಹಾಗೂ ಇತರೆ ಸರ್ವೆ ನಂಬರ್‌ಗಳಲ್ಲಿ ಒಟ್ಟು ವಿಸ್ತೀರ್ಣ 63 ಎಕರೆ 30 ಗುಂಟೆ ಜಮೀನನ್ನು ಕರ್ನಾಟಕ ಗೃಹಮಂಡಳಿಗೆ ವಸತಿ ಯೋಜನೆಗಾಗಿ ಭೂಸ್ವಾಧೀನಪಡಿಸಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಂಇ 40 ಭೂಸ್ವಾತು 2007 ದಿನಾಂಕ: 04.04.2008ರಲ್ಲಿ ಭೂಸ್ವಾಧೀನ ಅಧಿನಿಯಮ 1894 (ಕೇಂದ್ರ ಅಧಿನಿಯಮ 1894ರ (1)ರ ಕಲಂ 6(1)ರನ್ವಯ ಅಂತಿಮ ಘೋಷಣೆಯನ್ನು ಹೊರಡಿಸಲಾಗಿರುತ್ತದೆ.

ಈ ಪೈಕಿ ಸರ್ವೆ ನಂಬರ್ 135/4ಎ3 ರಲ್ಲಿ ಸ್ವಾಧೀನಪಡಿಸಿರುವ 0.26 ಗುಂಟೆ ಜಮೀನಿನಲ್ಲಿ 0.02 ಗುಂಟೆ ವಿಸ್ತೀರ್ಣದಲ್ಲಿ ಭೂಮಾಲೀಕರಾದ ಶ್ರೀ ಕೃಷ್ಣಪ್ಪ ಬಿನ್ ಪುಟ್ಟಹನುಮಯ್ಯನವರ ತಂದೆ ಹಾಗೂ ತಾಯಿಯವರ ಸಮಾಧಿ ಇದ್ದು, ಬಂಧು–ಬಳಗದವರೊಂದಿಗೆ ಪೂಜೆ ಸಲ್ಲಿಸುತ್ತಿದ್ದು, ಸದರಿ ಪ್ರದೇಶವನ್ನು ಭೂಸ್ವಾಧೀನದಿಂದ ಕೈಬಿಡುವಂತೆ ಅರ್ಜಿ ಸಲ್ಲಿಸಿರುತ್ತಾರೆ. ಕರ್ನಾಟಕ ಗೃಹಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿಗಳು ಸಹಾಯಕ ಕಾರ್ಯಪಾಲಕ ಅಭಿಯಂತರರು, ತುಮಕೂರು ಹಾಗೂ ಮೋಜಣಿದಾರರೊಂದಿಗೆ ಸ್ಥಳ ಪರಿಶೀಲನೆ ಮಾಡಿದ್ದು ಅರ್ಜಿದಾರರು ಕೋರಿರುವಂತೆ ಅವರ ಪೂರ್ವಜರ ಸಮಾಧಿ ಇರುವ 0.02 ಗುಂಟೆ ಪ್ರದೇಶವನ್ನು ಭೂಸ್ವಾಧೀನದಿಂದ ಕೈಬಿಟ್ಟು ಭೂಸ್ವಾಧೀನ ಕಾಯ್ದೆ ಕಲಂ 48(1)ರ ಅಧಿಸೂಚನೆಯನ್ನು ಹೊರಡಿಸಬಹುದಾಗಿದೆಯೆಂದು ಮಂಡಳಿಯ ಆಯುಕ್ತರು ಪ್ರಸ್ತಾಪಿಸಿರುತ್ತಾರೆ.

ಅರ್ಜಿದಾರರ ಮನವಿಯನ್ನು ಪರಿಗಣಿಸಿ ಭೂಸ್ವಾಧೀನ ಅಧಿನಿಯಮ 1894ರ (ಕೇಂದ್ರ ಅಧಿನಿಯಮ 1894ರ (1)) ಕಲಂ 48(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ 0.02 ಗುಂಟೆ ಜಮೀನನ್ನು ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಗೂಳೂರು ಹೋಬಳಿ, ಗೂಳೂರು ಗ್ರಾಮದಲ್ಲಿ ಕರ್ನಾಟಕ ಗೃಹಮಂಡಳಿಯ ವಸತಿ ಯೋಜನೆಗಾಗಿ ಸದರಿ ಅಧಿನಿಯಮದ 6ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಹೊರಡಿಸಿರುವ ಅಧಿಸೂಚನೆ ಸಂಖ್ಯೆ:ಕಂಇ 40 ಭೂಸ್ವಾತು 2007 ದಿನಾಂಕ 04.04.2008ರಲ್ಲಿ ಭೂಸ್ವಾಧೀನಪಡಿಸಿರುವುದನ್ನು ಹಿಂತೆಗೆದುಕೊಂಡಿರುತ್ತದೆ. ಭೂಮಾಲೀಕರು ಕಲಂ 48(2)ರನ್ವಯ ಯಾವುದೇ ನಷ್ಟ ಪರಿಹಾರವನ್ನು ಪಡೆಯಲು ಅರ್ಹರಿರುವುದಿಲ್ಲ.

**ಅನುಸೂಚಿ**

**ಜಿಲ್ಲೆ: ತುಮಕೂರು ತಾಲ್ಲೂಕು: ತುಮಕೂರು ಹೋಬಳಿ: ಗೂಳೂರು ಗ್ರಾಮ: ಗೂಳೂರು**

| ಕ್ರ. ಸಂ. | ಖಾತೆದಾರರ ಹೆಸರು | ಸ.ನಂ. | ತರಹೆ | ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
|---|---|---|---|---|---|
| 1 | ಕೃಷ್ಣಪ್ಪ ಬಿನ್ ಪುಟ್ಟಹನುಮಯ್ಯ | 135/4ಎ3 | – | 0.02 ಗುಂಟೆ (0.26 ಗುಂಟೆ ಜಮೀನಿನ ಪೈಕಿ) | –– |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 105

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ–2)

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(109)(ಪೂ)ಸಿ.ಆರ್:4/09–10, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2010**

**ವಿಷಯ:** ಶ್ರೀಶ್ರೀಶ್ರೀ ಓಂಶಕ್ತಿದೇವಿ ಸೇವಾ ಟ್ರಸ್ಟ್, ರಾಮಯ್ಯ ಗೋವಿಂದಪ್ಪ ಲೇಔಟ್, ಯಮಲೂರು ಗ್ರಾಮ ಮತ್ತು ಅಂಚೆ, ವರ್ತೂರು ಹೋಬಳಿ, ಬೆಂಗಳೂರು 560037 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಯಮಲೂರು ಗ್ರಾಮದ ಸ.ನಂ. 46/49 ರಲ್ಲಿ 0–02.12 ಗುಂಟೆ ಜಮೀನನ್ನು ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀಶ್ರೀಶ್ರೀ ಓಂಶಕ್ತಿದೇವಿ ಸೇವಾ ಟ್ರಸ್ಟ್, ರಾಮಯ್ಯ ಗೋವಿಂದಪ್ಪ ಲೇಔಟ್, ಯಮಲೂರು ಗ್ರಾಮ ಮತ್ತು ಅಂಚೆ, ವರ್ತೂರು ಹೋಬಳಿ, ಬೆಂಗಳೂರು 560037 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಯಮಲೂರು ಗ್ರಾಮದ ಸ.ನಂ. 46/49 ರಲ್ಲಿ 0–02.12 ಗುಂಟೆ ಜಮೀನನ್ನು ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ

ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್/ಸಿ.ಆರ್/18/09–10, ದಿನಾಂಕ: 18.12.2009 ರಲ್ಲಿ ಪ್ರಸ್ತಾವಿತ ಯಮಲೂರು ಗ್ರಾಮದ ಸ.ನಂ. 46/49 ರಲ್ಲಿ 0–02.12 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: 18/09–10, ದಿನಾಂಕ:18.12.2009 ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಯಮಲೂರು ಗ್ರಾಮದ ಸ.ನಂ. 46/49 ರಲ್ಲಿ 0–02.12 ಗುಂಟೆ ಜಮೀನನ್ನು ಶ್ರೀಶ್ರೀಶ್ರೀ ಓಂಶಕ್ತಿದೇವಿ ಸೇವಾ ಟ್ರಸ್ಟ್, ರಾಮಯ್ಯ ಗೋವಿಂದಪ್ಪ ಲೇಔಟ್, ಯಮಲೂರು ಗ್ರಾಮ ಮತ್ತು ಅಂಚೆ, ವರ್ತೂರು ಹೋಬಳಿ, ಬೆಂಗಳೂರು 560037 ರವರಿಗೆ ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ರಂತೆ ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಳದಿ ವಲಯದಲ್ಲಿ ಬರುತ್ತಿದ್ದು, ಓಂ ಶಕ್ತಿ ಅಮ್ಮನ ದೇವಸ್ಥಾನ ನಿರ್ಮಾಣ ಮಾಡುವ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 89

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(109)(ಪೂ)ಸಿ.ಆರ್:10/08–09, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2010**

**ವಿಷಯ:** ಶ್ರೀ ವೇಮನ ಮೆಡಿಕಲ್ಸ್ ಟ್ರಸ್ಟ್, ನಂ.904, 'ಅಕ್ಷಯ' 4ನೇ ಕ್ರಾಸ್, 9ನೇ ಮೈನ್, ಮೈಕೋ ಕಾಲೋನಿ, ಬಿ.ಟಿ.ಎಂ.ಲೇಔಟ್, 2ನೇ ಫೇಸ್, ಬೆಂಗಳೂರು 560076 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ದೊಡ್ಡಕನ್ನಲ್ಲಿ ಗ್ರಾಮದ ಸ.ನಂ. 23/1 ರಲ್ಲಿ 0–04 ಗುಂಟೆ ಜಮೀನನ್ನು ಆಸ್ಪತ್ರೆ ನಡೆಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ವೇಮನ ಮೆಡಿಕಲ್ಸ್ ಟ್ರಸ್ಟ್, ನಂ.904, 'ಅಕ್ಷಯ' 4ನೇ ಕ್ರಾಸ್, 9ನೇ ಮೈನ್, ಮೈಕೋ ಕಾಲೋನಿ, ಬಿ.ಟಿ.ಎಂ. ಲೇಔಟ್, 2ನೇ ಫೇಸ್, ಬೆಂಗಳೂರು 560076 ರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ದೊಡ್ಡಕನ್ನಲ್ಲಿ ಗ್ರಾಮದ ಸ.ನಂ. 23/1 ರಲ್ಲಿ 0–04 ಗುಂಟೆ ಜಮೀನನ್ನು ಆಸ್ಪತ್ರೆ ನಡೆಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್/ಸಿ.ಆರ್/269/08–09, ದಿನಾಂಕ: 7.7.2009 ರಲ್ಲಿ ಪ್ರಸ್ತಾವಿತ ದೊಡ್ಡಕನ್ನಲ್ಲಿ ಗ್ರಾಮದ ಸ.ನಂ. 23/1 ರಲ್ಲಿ 0–04 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: 2286/95–96, ದಿನಾಂಕ:2.1.1996 ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಆಸ್ಪತ್ರೆ ನಡೆಸುವ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯ್ದೆ 1995ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ದೊಡ್ಡಕನ್ನಲ್ಲಿ ಗ್ರಾಮದ ಸ.ನಂ. 23/1 ರಲ್ಲಿ 0–04 ಗುಂಟೆ ಜಮೀನನ್ನು ಶ್ರೀ ವೇಮನ ಮೆಡಿಕಲ್ ಟ್ರಸ್ಟ್, ನಂ.904, 'ಅಕ್ಷಯ' 4ನೇ ಕ್ರಾಸ್, 9ನೇ ಮೈನ್, ಮೈಕೋ ಕಾಲೋನಿ, ಬಿ.ಟಿ.ಎಂ.ಲೇಔಟ್, 2ನೇ ಫೇಸ್, ಬೆಂಗಳೂರು 560076 ರವರಿಗೆ ಆಸ್ಪತ್ರೆ ನಡೆಸುವ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ಕಂಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ರಂತೆ ಆಸ್ಪತ್ರೆ ನಡೆಸುವ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55

ಪೇಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಆಸ್ಪತ್ರೆ ನಡೆಸುವ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 90

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ಸಂಖ್ಯೆ:ಎಲ್.ಆರ್.ಎಫ್(ಅ)(109)ಸಿಆರ್:15/2009–10, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2010**

**ವಿಷಯ:** ಶ್ರೀ ಶಿರ್ವಿ ಸಮಾಜ ಟ್ರಸ್ಟ್ [ರಿ] ಆನೇಕಲ್ ತಾಲ್ಲೂಕು ರವರು ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅತ್ತಿಬೆಲೆ ಗ್ರಾಮದ ಸ.ನಂ. 310/5ರಲ್ಲಿ 0–10 ಗುಂಟೆ ವಿಸ್ತೀರ್ಣದ ಜಮೀನನ್ನು ದೇವಸ್ಥಾನ ಕಟ್ಟುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಶಿರ್ವಿ ಸಮಾಜ ಟ್ರಸ್ಟ್ [ರಿ] ಆನೇಕಲ್ ತಾಲ್ಲೂಕು ರವರು ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅತ್ತಿಬೆಲೆ ಗ್ರಾಮದ ಸ.ನಂ. 310/5ರಲ್ಲಿ 0–10 ಗುಂಟೆ ವಿಸ್ತೀರ್ಣದ ಜಮೀನನ್ನು ದೇವಸ್ಥಾನ ಕಟ್ಟುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ತಹಸೀಲ್ದಾರ್, ಆನೇಕಲ್ ತಾಲ್ಲೂಕು ಆನೇಕಲ್ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ ಸಿಆರ್–11/2009–10 ದಿನಾಂಕ: 2.1.2010 ರಲ್ಲಿ ಪ್ರಸ್ತಾವಿತ ಅತ್ತಿಬೆಲೆ ಗ್ರಾಮದ ಸ.ನಂ. 310/5ರಲ್ಲಿ 0–10 ಗುಂಟೆ ಜಮೀನನ್ನು ಖರೀದಿಗೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು, ಸಬ್ ರಿಜಿಸ್ಟ್ರಾರ್ ಕಛೇರಿ, ಅತ್ತಿಬೆಲೆ ಇಲ್ಲಿ ನೊಂದಣಿ ಸಂಖ್ಯೆ: 49/2008–09 ದಿನಾಂಕ:09.07.2008 ರಲ್ಲಿ ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಗೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ದೇವಸ್ಥಾನ ಕಟ್ಟುವ ಉದ್ದೇಶಕ್ಕೆ 04 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಲಾಗಿತ್ತು. ಆದರೆ ಈ ಪ್ರಸ್ತಾವನೆಗೆ ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (1)(11) ರಡಿಯಲ್ಲಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.03ರಂತೆ ಕಲಂ, 63, 79ಎ, 79ಬಿ ಮತ್ತು 80ಕ್ಕೆ ವಿನಾಯ್ತಿ ನೀಡಿ ದೇವಸ್ಥಾನ

ಕಟ್ಟುವ ಉದ್ದೇಶಕ್ಕಾಗಿ 02 ಯೂನಿಟ್ ಜಮೀನನ್ನು ಖರೀದಿಸಿ ಹೊಂದಲು ಅವಕಾಶ ಕಲ್ಪಿಸಿರುವುದರಿಂದ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಅತ್ತಿಬೆಲೆ ಗ್ರಾಮದ ಸ.ನಂ. 310/5ರಲ್ಲಿ 0–10 ಗುಂಟೆ ವಿಸ್ತೀರ್ಣದ ಜಮೀನನ್ನು ಖರೀದಿಸಲು ಶ್ರೀ ಶಿರ್ವಿ ಸಮಾಜ ಟ್ರಸ್ಟ್ [ರಿ] ಆನೇಕಲ್ ತಾಲ್ಲೂಕು ರವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಉದ್ದೇಶಿತ ಯೋಜನೆಗೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಲು ಹಾಗೂ ಒಂದು ವೇಳೆ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿದ್ದಲ್ಲಿ ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಈ ಜಮೀನಿನ ಸುತ್ತಮುತ್ತಲಿನ ಗ್ರಾಮದ ಬಡ ವಿದ್ಯಾರ್ಥಿಗಳಿಗೆ ಉಚಿತ ಶೈಕ್ಷಣಿಕ ವಿದ್ಯಾಭ್ಯಾಸಕ್ಕೆ ಶೇ. 5%ರಷ್ಟು ಸ್ಥಾನಗಳನ್ನು ನೀಡತಕ್ಕದ್ದು.
7. ಈ ಅನುಮತಿ ಕರ್ನಾಟಕ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಲಾಗಿರುತ್ತದೆ. ಇತರೆ ಕಾಯ್ದೆ ಹಾಗೂ ಕಾನೂನುಗಳನ್ನು ಉಲ್ಲಂಘಿಸಿದಲ್ಲಿ ಸಂಬಂಧಿಸಿದ ಕಾಯ್ದೆಯಡಿಯಲ್ಲಿ ಅಗತ್ಯ ಕ್ರಮ ಜರುಗಿಸಲು ಅವಕಾಶ ನೀಡಲಾಗಿರುತ್ತದೆ.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸುವುದಲ್ಲದೇ ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

**ಹೆಚ್. ರಾಮಾಂಜನೇಯ**

ಪಿ.ಆರ್. 91 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸ.ನಂ. 14 ರಲ್ಲಿ 2–00 ಎಕರೆ ಜಮೀನಲ್ಲಿಯ ಕೊಳಚೆ ಪ್ರದೇಶದ ನಿವಾಸಿಗರಿಗೆ ಪುನರ್ವಸತಿ ಕಲ್ಪಿಸಲು ಇದೆ ಗ್ರಾಮದ ಸರ್ವೆ ನಂ. 13 ರಲ್ಲಿ 2–00 ಎಕರೆ ಮಂಜೂರಿಯ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಪತ್ರ ಸಂಖ್ಯೆ.ಆರ್.ಡಿ.70:ಎಲ್‌ಜಿಪಿ/2008, ದಿನಾಂಕ: 8.8.2008.

2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ರವರ ಪತ್ರ ಸಂಖ್ಯೆ:ಎಲ್‌ಎನ್‌ಡಿ:ಸಿಆರ್:682/09–10, ದಿನಾಂಕ: 25.1.2010, 19.2.2010.

**ಪ್ರಸ್ತಾವನೆ:**

ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (2) ರ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರು ವರದಿಯಂತೆ ಕೆ.ಆರ್. ಪುರ ಹೋಬಳಿಯ ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸ.ನಂ. 14 ರಲ್ಲಿ 2–00 ಎಕರೆ ಜಮೀನಿಗೆ ಕೊಳಚೆ ಪ್ರದೇಶದ ನಿವಾಸಿಗರಿಗೆ ವಸತಿ ಕಲ್ಪಿಸಲು ಹಸ್ತಾಂತರಿಸಲು ತಿಳಿಸಿದ್ದು, ಸಹಾಯಕ ಕಾರ್ಯಪಾಲಕ ಅಭಿಯಂತರರು 1ನೇ ಉಪವಿಭಾಗ, ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ರವರು ಪತ್ರ ಸಂ:371/09–10, ದಿನಾಂಕ: 30.12.2009 ರಂತೆ ಸದರಿ ಸರ್ವೆ ನಂ. 14 ರ ಜಮೀನು ನ್ಯಾಯಾಲಯದಲ್ಲಿ ದಾವೆ ಇರುವುದಾಗಿ ತಿಳಿದು ಬಂದಿರುವುದರಿಂದ ಈ ಜಮೀನಿನ ಬದಲಾಗಿ ಇದೇ ಗ್ರಾಮದ ಸ.ನಂ. 13 ರಲ್ಲಿ 2–00 ಎಕರೆ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ

ಮಂಡಳಿಗೆ ನೀಡುವಂತೆ ಕೋರಿರುತ್ತಾರೆ. ಈ ಬಗ್ಗೆ ತಹಶೀಲ್ದಾರರು ತಾಲ್ಲೂಕು ಮೋಜಣಿದಾರರು ಹಾಗೂ ರಾಜಸ್ವ ನಿರೀಕ್ಷಕರು ಪರಿಶೀಲಿಸಿ ವರದಿ ನೀಡಿರುವಂತೆ ಕೇಂದ್ರ ಪುರಸ್ಕೃತ ಜಿ.ಎನ್.ಎನ್.ಯು.ಆರ್.ಎಂ.ಬಿ.ಎಸ್.ಯುವ ಯೋಜನೆಯಡಿ ಕೊಳಚೆ ಪ್ರದೇಶದ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಸುಮಾರು 208 ಮನೆಗಳನ್ನು ನಿರ್ಮಿಸಲು ಕೊಳಚೆ ನಿರ್ಮೂಲನಾ ಮಂಡಳಿಗೆ ನೀಡಲು ನಗರೇಶ್ವರಿ ನಾಗೇನಹಳ್ಳಿ ಗ್ರಾಮದ ಸ.ನಂ. 13 ರಲ್ಲಿ ಒಟ್ಟು 23–03 ಎಕರೆ/ಗುಂಟೆ ಸರ್ಕಾರಿ ಗೋಮಾಳ ಜಮೀನು ಆಗಿದ್ದು, ಈ ಪೈಕಿ 12–00 ಎಕರೆ ಆರ್ಮಿ ಇನ್ಸಿಟ್ಯೂಟ್ ಆಫ್ ಹೈಲ್ತ್ ಮ್ಯಾನೇಜಮೆಂಟ್ ರವರಿಗೆ ಮಂಜೂರಿಯಾಗಿದ್ದ ಉಳಿಕೆ 11–03 ಎಕರೆ/ಗುಂಟೆ ಪೈಕಿ 6–00 ಎಕರೆ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದು, ಇನ್ನುಳಿದ 5–03 ಎಕರೆ/ಗುಂಟೆ ಹಾಲಿ ಖುಲ್ಲಾ ಇರುವುದಾಗಿ ಸದರಿ ಜಮೀನಿನ ಪೈಕಿ 2–00 ಎಕರೆ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಕೇಂದ್ರ ಪುರಸ್ಕೃತ ಯೋಜನೆ ಅಡಿ ಕೊಳಚೆ ಪ್ರದೇಶದ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಿ ಹಸ್ತಾಂತರಿಸಲು ತಾಲ್ಲೂಕು ಮೋಜಣಿದಾರರು ತಯಾರಿಸಿದ ನಕ್ಷೆ ಹಾಗೂ ರಾಜಸ್ವ ನಿರೀಕ್ಷಕರು ರವರ ವರದಿ ಆರ್.ಟಿ.ಸಿ. ಗಳೊಂದಿಗೆ ತಹಶೀಲ್ದಾರರು ಶಿಫಾರಸ್ಸು ಮಾಡಿರುತ್ತಾರೆ.

**ಆದೇಶ**

**ಸಂಖ್ಯೆ:ಎಲ್ಎನ್‌ಡಿ:(ಪೂ):ಸಿಆರ್:250/09–10, ದಿನಾಂಕ: 4ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಹಾಗೂ ಕೇಂದ್ರ ಪುರಸ್ಕೃತ ಜೆ.ಎನ್.ಎನ್.ಯು.ಆರ್. ಎಂ.ಬಿ.ಎಸ್.ಯಂತೆ ಯೋಜನೆಯಡಿ ಕೊಳಚೆ ಪ್ರದೇಶದ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸುವ ದೃಷ್ಟಿಯಿಂದ ಉಚಿತವಾಗಿ ನಿವೇಶನಗಳನ್ನು ವಿತರಿಸುವ ಸಲುವಾಗಿ ನಗರೇಶ್ವರ ನಾಗೇನಹಳ್ಳಿ ಗ್ರಾಮದ ಸರ್ವೆ ನಂ. 13 ರಲ್ಲಿ 2–00 ಎಕರೆ ವಿಸ್ತೀರ್ಣಕ್ಕೆ ತಾಲ್ಲೂಕು ಮೋಜಣಿದಾರರು ತಯಾರಿಸಿರುವ ಸ್ಕೆಚ್‌ನಂತೆ ಸರ್ಕಾರಿ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 71 ರಡಿ ಕಾಯ್ದಿರಿಸಲು ಹಾಗೂ ಕೊಳಚೆ ನಿರ್ಮೂಲನಾ ಮಂಡಳಿಗೆ ಹಸ್ತಾಂತರಿಸಲು ಈ ಕೆಳಕಂಡ ಷರತ್ತುಗೊಳಪಡಿಸಿ ಆದೇಶಿಸಿದೆ.

**ಷರತ್ತುಗಳು**

1. ಹಸ್ತಾಂತರಗೊಂಡ ಜಮೀನನ್ನು ಉದ್ದೇಶಿತ ಕೊಳಚೆ ನಿರ್ಮೂಲನಾ ಮಂಡಳಿಯ ಪುನರ್ವಸತಿ ಕಲ್ಪಿಸಲು ಮಾತ್ರ ಹಸ್ತಾಂತರಿಸಿದ್ದು, ಎರಡು ವರ್ಷದೊಳಗೆ ಸದರಿ ಉದ್ದೇಶಕ್ಕಾಗಿ ಜಮೀನನ್ನು ಬಳಸತಕ್ಕದ್ದು.
2. ಉದ್ದೇಶಿತ ಯೋಜನೆಗೆ ಈ ಜಮೀನು ಬಳಕೆಯಾಗದಿದ್ದಲ್ಲಿ ಕೂಡಲೇ ಜಮೀನನ್ನು ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
3. ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಆದೇಶವು ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.
4. ಈ ಜಮೀನಿನ ಭೂಮಿಯಲ್ಲಿ ವಿನಾಶಕಾರಿ ಅಥವಾ ಜಮೀನಿಗೆ ಖಾಯಂ ಹಾನಿ ಉಂಟು ಮಾಡುವ ರೀತಿ ಏನನ್ನೂ ಮಾಡತಕ್ಕದ್ದಲ್ಲ.

**ಹೆಚ್. ರಾಮಾಂಜನೇಯ**

ಪಿ.ಆರ್. 92 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ:ಎಲ್.ಆರ್.ಎಫ್:(ಎಸ್)(109)ಸಿಆರ್:13/2009–10, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2010**

**ವಿಷಯ:** ಗ್ರೇಟರ್ ಬೆಂಗಳೂರು ಕಲ್ಚರಲ್ ಟ್ರಸ್ಟ್ ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ 2–36 ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಗೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಶಾಇ.47/ಶಾಸನ/ 2001: ಬೆಂಗಳೂರು ದಿನಾಂಕ: 23.04.2003.
2. ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗರವರ ಪತ್ರ ಸಂಖ್ಯೆ:ಎಲ್ಆರ್‌ಎಫ್.(109):(ಎಸ್):ಸಿ.ಆರ್:02/09–10 ದಿನಾಂಕ: 27.1.2010.
3. ಗ್ರೇಟರ್ ಬೆಂಗಳೂರು ಕಲ್ಚರಲ್ ಟ್ರಸ್ಟ್ ಡಾ: ಪಾಪಣ್ಣ ಎಸ್ಟೇಟ್, ಗೊಟ್ಟಿಗೆರೆ ಅಂಚೆ, ಹೊಮ್ಮದೇವನಹಳ್ಳಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಮನವಿ ದಿನಾಂಕ: 11.11.2009.

ಗ್ರೇಟರ್ ಬೆಂಗಳೂರು ಕಲ್ಚರಲ್ ಟ್ರಸ್ಟ್ ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ 2–36 ಎಕರೆ/ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು

ನಮೂನೆ–15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ, ರವರ ಪತ್ರದ ಸಂಖ್ಯೆ: ಎಲ್.ಆರ್.ಎಫ್(109)(ಎಸ್):ಸಿಆರ್:2/09–10 ದಿನಾಂಕ: 27.1.2010 ರಲ್ಲಿ ಪ್ರಸ್ತಾವಿತ ಹೊಮ್ಮದೇವನಹಳ್ಳಿ ಗ್ರಾಮದ ಸ.ನಂ. 60 ರಲ್ಲಿ 2–36 ಎಕರೆ/ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೊಂದಣಿ ಸಂಖ್ಯೆ: 1297/2006–07, ದಿನಾಂಕ:26.3.2007 ರಂದು ನೊಂದಣಿಯಾಗಿರುತ್ತದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109 (i) (ii) ರ ಪ್ರಕಾರ ಶೈಕ್ಷಣಿಕ ಸಂಸ್ಥೆಗಳಿಗೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (i)(ii) ಪ್ರಕಾರ ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಹೊಮ್ಮದೇವನಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ 2–36 ಎಕರೆ/ಗುಂಟೆ ಜಮೀನನ್ನು ಗ್ರೇಟರ್ ಬೆಂಗಳೂರು ಕಲ್ಚರಲ್ ಟ್ರಸ್ಟ್ ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (i) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂಖ್ಯೆ:ವ್ಯಶಾಇ.47/ಶಾಸನ/2001: ಬೆಂಗಳೂರು, ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಜಮೀನನ್ನು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸುವುದಲ್ಲದೇ ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8. ಪ್ರಸ್ತುತ ಸಂಸ್ಥೆ ಎರಡು ವರ್ಷಗಳಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಸೂಕ್ತ ಅನುಮೋದನೆ ಪಡೆದುಕೊಳ್ಳುವ ಷರತ್ತಿಗೊಳಪಡಿಸಿ ಅನುಮತಿ ನೀಡಿದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 93

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.